# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೭, ೨೦೧೫ (ಭಾದ್ರಪದ ೨೬, ಶಕ ವರ್ಷ ೧೯೩೭)<br>Bengaluru, Thursday, September 17, 2015 (Bhadrapada 26, Shaka Varsha 1937) | ಸಂಚಿಕೆ ೩೮<br>Issue 38 |
|---|---|---|


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು ಹಾಗೂ ಕರ್ನಾಟಕ ಉಚ್ಛ ನ್ಯಾಯಾಲಯವು ಮಾಡಿದ ನಿಯಮಗಳು

### ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಾಇ 82 ಎಲ್‌ಡಬ್ಲ್ಯೂಎ 2015, ಬೆಂಗಳೂರು, ದಿನಾಂಕ : 29–05–2015.**

ಕರ್ನಾಟಕ ರಾಜ್ಯದಾದ್ಯಂತ ಯಾವುದೇ "**ಖಾಸಗಿ ಸಫಾಯಿ ಕರ್ಮಚಾರಿ**" ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ನಿಯಮ ಸಂಖ್ಯೆ : XI) ಕಲಂ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಎರಡು (2) ತಿಂಗಳ ಅವಧಿಯೊಳಗೆ ಬಾಧಿತರಾಗುವ ವ್ಯಕ್ತಿಗಳಿಂದ ಸಲಹೆ/ ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, 4ನೇ ಮಹಡಿ, ವಿಕಾಸಸೌಧ, ಬೆಂಗಳೂರು–560001 ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ ಬನ್ನೇರುಘಟ್ಟ ರಸ್ತೆ, ಬೆಂಗಳೂರು–560029 ಇವರಿಗೆ ಸಲ್ಲಿಸಬಹುದಾಗಿರುತ್ತದೆ.

1948ರ ಕನಿಷ್ಠ ವೇತನ ಕಾಯ್ದೆಯ ಕಲಂ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಕರ್ನಾಟಕ ಸರ್ಕಾರವು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದಾದ್ಯಂತ ಯಾವುದೇ "**ಖಾಸಗಿ ಸಫಾಯಿ ಕರ್ಮಚಾರಿ**" ಉದ್ದಿಮೆಗೆ ಈ ಕೆಳಕಂಡಂತೆ ಕನಿಷ್ಠ ವೇತನ ದರಗಳು ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರಮ ಸಂಖ್ಯೆ | ಕೆಲಸದ ವರ್ಗೀಕರಣ | ಕನಿಷ್ಠ ವೇತನ ದರಗಳು | | | |
|---|---|---|---|---|---|
| | | | ವಲಯ–1 | ವಲಯ–2 | ವಲಯ–3 |
| 1 | ಸಫಾಯಿ ಕರ್ಮಚಾರಿಗಳು, ಒಳಚರಂಡಿ, ಸ್ನಾನಗೃಹ ಮತ್ತು ಶೌಚಾಯಲಗಳ ಶುಚಿತ್ವ ಹಾಗೂ ಅದೇ ರೀತಿಯ ಕೆಲಸಗಳಲ್ಲಿ ನಿರತರಾಗಿರುವ ಎಲ್ಲಾ ಕಾರ್ಮಿಕರು. | ದಿನಕ್ಕೆ | 385–00 | 375–00 | 350–00 |
| | | ತಿಂಗಳಿಗೆ | 10,010–00 | 9,750–00 | 9,100–00 |

**ತುಟ್ಟಿಭತ್ಯೆ :**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 6205 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 6205 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ

ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2015 ರಿಂದ ಡಿಸೆಂಬರ್ 2015)ರ ಸರಾಸರಿ ಆಧಾರದ ಮೇಲೆ 2016 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

   ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ :–

   **ಅ) ಮಾಸಿಕ ವೇತನವನ್ನು ಪಡೆಯುವವರು :–** ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು X ತುಟ್ಟಿಭತ್ಯೆಯ ದರ X 30 ದಿನಗಳು = ತಿಂಗಳ ತುಟ್ಟಿಭತ್ಯೆ.

   **ಆ) ದಿನಗೂಲಿ ವೇತನ ಪಡೆಯುವವರು :–**

   ಪ್ರತಿ ವರ್ಷ ಹೆಚ್ಚಾಗುವ ಅಂಶಗಳು X ತುಟ್ಟಿಭತ್ಯೆಯ ದರ X 30 = ದಿನದ ತುಟ್ಟಿಭತ್ಯೆ.

   26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ವೇತನ ದರಗಳನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

   **ವಲಯ–1 :** ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು ಮತ್ತು ಇವುಗಳಿಗೆ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು.

   **ವಲಯ–2 :** ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ, ರಾಜ್ಯದ ಜಿಲ್ಲಾ ಕೇಂದ್ರಗಳು.

   **ವಲಯ–3 :** ವಲಯ–1 ಮತ್ತು 2 ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 429**
**SC-200**

**ಪಿ. ನಾಗರತ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಾರ್ಮಿಕ ಇಲಾಖೆ.

## FINANCE SECRETARIAT

### NOTIFICATION

### No. FD 35 BFC 2015, Bengaluru, dated :04 -06-2015.

In Notification No. DPAR 396 SAS 2015 dated 03.06.2015 it has been ordered that Sri D.V. Prasad, I.A.S, posted and his services are placed at the disposal of Finance Department for being posted as Managing Director, Karnataka State Financial Corporation, Bengaluru.

Accordingly, in exercise of the powers conferred under Section 17 (l)(a) of the SFCs (Amendment) Act, 2000, the Government of Karnataka are pleased to appoint Sri D.V. Prasad, IAS, as Managing Director of Karnataka State Financial Corporation, Bengaluru with immediate effect.

By Order and in name of the Governor of Karnataka

**P.R. 430**

**Dipti Aditya Kanade**
Deputy Secretary to Govt. (B&R)
Finance Department

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಕಾಇ 32 ಕಾಬಾನಿ 2015, ಬೆಂಗಳೂರು, ದಿನಾಂಕ : 22-05-2015.**

ಕಾರ್ಖಾನೆಗಳ ಕಾಯ್ದೆ 1948ರ ಕಲಂ 66(1)(ಬಿ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮೆ॥ ಕೆಬಿಡಿ ಷುಗರ್ಸ್ & ಡಿಸ್ಟಲರೀಸ್ ಲಿಮಿಟೆಡ್, 20ನೇ ಮೈಲಿ, ತುಮಕೂರು ರಸ್ತೆ, ನೆಲಮಂಗಲ, ಬೆಂಗಳೂರು ಈ ಕಾರ್ಖಾನೆಯ ಆಡಳಿತ ವರ್ಗದವರಿಗೆ ಈ ಕಾರ್ಖಾನೆಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಂದ ಎರಡನೇ ಪಾಳಿಯಲ್ಲಿ ರಾತ್ರಿ 10.00 ಗಂಟೆಯ ತನಕ ಕೆಲಸ ಮಾಡಿಸಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುಮತಿ ನೀಡಲಾಗಿದೆ.

1. ಎರಡನೇ ಪಾಳಿಯಲ್ಲಿ ಕೆಲಸ ನಿರ್ವಹಿಸಲು ಮಹಿಳಾ ಕಾರ್ಮಿಕರಿಂದ ಲಿಖಿತ ಅನುಮತಿಯನ್ನು ಪಡೆಯಬೇಕು.
2. ರಾತ್ರಿ 10-00 ಗಂಟೆಯವರೆಗೆ ಕೆಲಸ ನಿರ್ವಹಿಸುವ ಮಹಿಳಾ ಕಾರ್ಮಿಕರನ್ನು ಅವರವರ ಮನೆಗಳಿಗೆ ತಲುಪಿಸಲು ವಾಹನ ಸೌಕರ್ಯವನ್ನು ಒದಗಿಸುವುದು.
3. ಮಹಿಳಾ ಕಾರ್ಮಿಕರಿಂದ ಯಾವುದೇ ಸಂದರ್ಭದಲ್ಲಿ ಹೆಚ್ಚುವರಿ ಕೆಲಸ ಮಾಡಿಸಬಾರದು.
4. ವಿನಾಯಿತಿ ಅವಧಿಯಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರಿಗೆ ಶಿಶು ಸಂರಕ್ಷಣೆ ಸೌಲಭ್ಯವನ್ನು ಅವರು ಕೆಲಸ ನಿರ್ವಹಿಸುವವರೆಗೆ ಒದಗಿಸುವುದು.
5. ಮಹಿಳಾ ಕಾರ್ಮಿಕರು ಲೈಂಗಿಕ ಕಿರುಕುಳಕ್ಕೆ ಒಳಗಾಗದಂತೆ ಎಲ್ಲಾ ಮುಂಜಾಗ್ರತಾ ಮತ್ತು ಸುರಕ್ಷತಾ ಕ್ರಮ ಕುರಿತು ಕ್ರಮ ಕೈಗೊಳ್ಳುವುದು.
6. ನಿಯಮಾನುಸಾರ ಸ್ಟಾಂಡಿಂಗ್ ಆರ್ಡರ್ಸ್ ತಯಾರಿಸಿ ಅನುಮೋದನೆಯನ್ನು ಪಡೆದುಕೊಳ್ಳುವುದು. ಸಾರ್ವಜನಿಕ ಸಂರಕ್ಷಣಾ ಸೌಲಭ್ಯಗಳನ್ನು ಅಂದರೆ ಇಎಸ್‌ಐ ಮತ್ತು ಪಿಎಫ್ ಸೌಲಭ್ಯಗಳನ್ನು ಖಾತರಿಪಡಿಸುವುದು, ವಾರದ ರಜೆಯನ್ನು ಕಡ್ಡಾಯವಾಗಿ ನೀಡತಕ್ಕದ್ದು.
7. ಸದರಿ ಸೂಚನೆಯನ್ನು ಕಾರ್ಖಾನೆ ನಾಮಫಲಕದಲ್ಲಿ ಪ್ರದರ್ಶಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 431**

**SC-50**

**ಬೋರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು).

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಕಾಇ 480 ಎಲ್‌ಎಸ್‌ಐ 2014, ಬೆಂಗಳೂರು, ದಿನಾಂಕ : 04-06-2015.**

ಕಾರ್ಮಿಕರ ರಾಜ್ಯ ವಿಮಾ ಕಾಯ್ದೆ 1948ರ (ಕೇಂದ್ರ ಕಾಯ್ದೆ 1948ರ ಕಾಯ್ದೆ 34) ಕಲಂ 87ರ ಜೊತೆ ಓದಲಾದ ಕಲಂ 91A ರ ಪ್ರಕಾರ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಬೀಡಿ ತಯಾರಿಕಾ ಸಂಸ್ಥೆಗಳಿಗೆ ಕಾರ್ಮಿಕರ ರಾಜ್ಯ ವಿಮಾ ಕಾಯ್ದೆ ವ್ಯಾಪ್ತಿಯಿಂದ ದಿನಾಂಕ : 01-01-2015 ರಿಂದ 31-12-2015ರ ಒಂದು ವರ್ಷದ ಅವಧಿಗೆ ಮಾತ್ರ ಸರ್ಕಾರವು ವಿನಾಯ್ತಿ ನೀಡಿ ಆದೇಶಿಸಿದೆ :-

1. ಮೆ॥ ಗುರುಕೃಪಾ ಬೀಡಿ ಇಂಡಸ್ಟ್ರೀಸ್ ಪ್ರೈ.ಲಿ, ಭಂಟ್ವಾಳ.
2. ಮೆ॥ ಜೆ.ಪಿ. ಟೊಬ್ಯಾಕೊ ಪ್ರಾಡಕ್ಟ್ಸ್ ಪ್ರೈ.ಲಿ., ಪುತ್ತೂರು.
3. ಮೆ॥ ಸೌತ್ ಕೆನರಾ ಹೋಮ್ ಇಂಡಸ್ಟ್ರೀಸ್, ಮಂಗಳೂರು.
4. ಮೆ॥ ದೀಪಕ್ ಎಂಟರ್‌ಪ್ರೈಸಸ್, ಮಂಗಳೂರು.
5. ಮೆ॥ ಪರ್‌ಭುದಾಸ್ ಕಿಶೋರ್‌ದಾಸ್ ಟೊಬ್ಯಾಕೊ ಪ್ರಾಡಕ್ಟ್ಸ್ ಪ್ರೈ. ಲಿ., ಮಂಗಳೂರು.
6. ಮೆ॥ ಜ್ಯೋತಿ ಹೋಮ್ ಇಂಡಸ್ಟ್ರೀಸ್ ಪ್ರೈ.ಲಿ., ಮೈಸೂರು.
7. ಮೆ॥ ಸದರನ್ ಇಂಡಿಯಾ ಬೀಡಿ ವರ್ಕ್ಸ್ ಪ್ರೈ. ಲಿ., ಪುತ್ತೂರು, ದ.ಕ.
8. ಮೆ॥ ಪಿ. ಅಂಡ್ ಜೆ. ಟೊಬ್ಯಾಕೊ ಪ್ರಾಡಕ್ಟ್ಸ್ ಕಂಪನಿ, ಬೆಳ್ತಂಗಡಿ.
9. ಮೆ॥ ಸೀಜಯ್, ಟೊಬ್ಯಾಕೊ ಲಿ., ಮಂಗಳೂರು.
10. ಮೆ॥ ದೇಸಾಯಿ ಬ್ರದರ್ಸ್ ಲಿ., ಮಂಗಳೂರು.

11. ಮೆ॥ ಭಾರತ್ ಬೀಡಿ ವರ್ಕ್ಸ್ ಪ್ರೈವೇಟ್ ಲಿ., ಮಂಗಳೂರು.

12. ಮೆ॥ ಪಿ.ವಿ.ಎಸ್. ಬೀಡೀಸ್ ಪ್ರೈ.ಲಿ., ಮಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಕ್ಷ್ಮಿದೇವಿ**

ಪೀಠಾಧಿಕಾರಿ–5,

ಕಾರ್ಮಿಕ ಇಲಾಖೆ, (ಕಾರಾವಿ ಯೋ.ವೈ. ಸೇವೆಗಳು).

## LABOUR SECRETARIAT

### NOTIFICATION

### No.LD 480 LSI 2014, Bengaluru, dated : 04-06-2015.

In exercise of the powers conferred under Section 87 read with Section 91 A of the Employees State Insurance Act 1948 (Central Act 34 of 1948) the Government is hereby exempts under ESI Act to the following Beedi Manufacturing Companies for a period of one year i.e., from 01-01-2015 to 31-12-2015:-

1) M/s Gurukrupa Beedi Industry Pvt. Ltd., Bantwala.
2) M/s. J.P. Tobacco Products Pvt. Ltd., Uppinangady, Puttur, Dakshina Kannada.
3) M/s. South Kanara Home Industries, Mangaluru.
4) M/s. Deepak Enterprises, Mangaluru.
5) M/s. Parbhudas Kishordas Tobacco Products Pvt. Ltd., Mangaluru.
6) M/s. Jyothi Home Industries Pvt. Ltd., Mysuru.
7) M/s Southern India Beedi Works Pvt. Ltd., Puttur, Dakshina Kannada.
8) M/s P&J Tobacco Products Co., Belthangadi, Dakshina Kannada.
9) M/s. Cee Jay Tobacco Ltd., Mangaluru.
10) M/s Desai Brothers Ltd., Mangaluru.
11) M/s. Bharath Beedi Works Pvt., Ltd., Mangaluru.
12) M/s. PVS Beedies Pvt. Ltd., Mangaluru.

By Order and in the name of the Governor of Karnataka,

**Lakshmidevi**

Desk Officer-5,

Labour Department, (ESIS (M) Services).

**P.R. 435**
**SC-100**

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

### NOTIFICATION

### No. ITD 07 MDA 2014, Bengaluru, Dated 02.06.2015.

As per the approval communicated in Government of India letter No. F.No. 62-1/2015-TS-I dated 27.05.2015 of the Department of Higher Education, Ministry of Human Resource Development, the Director, NIT, Suratkal, has been nominated as the Mentor Director of IIIT, Dharwad, Karnataka and the Registrar, NIT, Suratkal as Registrar (in-charge) of IIIT, Dharwad, Karnataka to hand hold the IIIT-D.

BY ORDER AND IN THE NAME OF GOVERNOR OF KARNATAKA,

**N. R. Prabhu**

Deputy Secretary to Government

Department of Information Technology,

Biotechnology and Science & Technology.

**P.R. 436**
**SC-50**

## PERSONNEL AND ADMINISTRATIVE REFORMS SECRETARIAT

### NOTIFICATION

### No: DPAR 32 SeVuNya 2015, Bengaluru, dated : 1st June, 2015.

In exercise of the powers conferred under Article 233 of the Constitution of India, the Governor of Karnataka hereby appoints the following five (05) Advocates as District Judges by Direct Recruitment under Karnataka Judicial Service (Recruitment) Rules 2004 and Amended Rules, 2011, with immediate effect :-

| Sl. No. | Names |
|---|---|
| 1 | Sri. Vijayakumar Malasiddappa Anandashetti |
| 2 | Sri. K.S. Bharath Kumar |
| 3 | Sri. Ravi M.R. |

| | |
|---|---|
| 4 | Smt. Nerale Veerabhadraiah Bhavani |
| 5 | Sri Nerale Veerabhadraiah Vijay |

BY ORDER AND IN THE NAME OF GOVERNOR OF KARNATAKA,

**Dr. Bagadi Gautham**

Deputy Secretary to Government

DP & AR (Services).

**P.R. 437**

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 46 ಪೊಸಿಲಿ 2015, ಬೆಂಗಳೂರು, ದಿನಾಂಕ : 04-06-2015.**

ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ವಿವಿಧ ವೃಂದದ ಅಧಿಕಾರಿಗಳಿಗೆ ಭಾರತ ಸಂವಿಧಾನದ ಅನುಚ್ಛೇದ 371ಜೆ ರನ್ವಯ ಮೀಸಲಾತಿಯನ್ನು ನೀಡುವಾಗ ಹೈದರಾಬಾದ್-ಕರ್ನಾಟಕ ವ್ಯಾಪ್ತಿ ಪ್ರದೇಶದಲ್ಲಿನ ಹುದ್ದೆಗಳನ್ನು ಸ್ಥಳೀಯ ಹುದ್ದೆಗಳನ್ನಾಗಿ (Regional local Cadre) ರಾಜ್ಯ ಮಟ್ಟದ ವ್ಯಾಪ್ತಿಯ ಕಛೇರಿಯ ಹುದ್ದೆಗಳನ್ನು ರಾಜ್ಯ ಮಟ್ಟದ ಸ್ಥಳೀಯ ಹುದ್ದೆಗಳೆಂದು (State Level local Cadre) ಗುರುತಿಸಬೇಕಾಗಿರುತ್ತದೆ. ಪ್ರಧಾನ ಆಡಳಿತಾಧಿಕಾರಿ, ಆಡಳಿತಾಧಿಕಾರಿ ಮತ್ತು ಸಹಾಯಕ ಆಡಳಿತಾಧಿಕಾರಿ ಹುದ್ದೆಗಳಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿನ ಹುದ್ದೆಗಳಿಗೆ 75% ರಷ್ಟು ಹಾಗೂ ರಾಜ್ಯ ಮಟ್ಟದ ಹುದ್ದೆಗಳನ್ನು ಹೊಂದಿರುವ ಕಛೇರಿಗಳಲ್ಲಿ 8%ರಷ್ಟು ಮೀಸಲಾತಿ ಅಳವಡಿಸಿ ಹುದ್ದೆಗಳನ್ನು ಈ ಕೆಳಕಂಡಂತೆ ಗುರುತಿಸಿ ಆದೇಶಿಸಿದೆ.

**ಪ್ರಧಾನ ಆಡಳಿತಾಧಿಕಾರಿ**

| ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಮಂಜೂರಾದ | | | ರಾಜ್ಯ ಮಟ್ಟದ ಕಛೇರಿಯಲ್ಲಿನ ವೃಂದ ಬಲ | ರಾಜ್ಯ ಮಟ್ಟದ ಸ್ಥಳೀಯ ವೃಂದ | ಹೈದ್ರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಕಛೇರಿಗಳಲ್ಲಿನ ವೃಂದ ಬಲ | ಪ್ರಾದೇಶಿಕ ಸ್ಥಳೀಯ ವೃಂದ | ರಾಜ್ಯ ವ್ಯಾಪ್ತಿ ಸ್ಥಳೀಯ ವೃಂದ | ನೇರ ನೇಮಕಾತಿ | ಮುಂಬಡ್ತಿ | ಉಳಿದ ಮೂಲ ವೃಂದ |
|---|---|---|---|---|---|---|---|---|---|---|
| ಮೂಲ ವೃಂದ | ನೇರ ನೇಮಕಾತಿ | ಮುಂಬಡ್ತಿ | | | | | | | | |
| 1 | 0 | 1 (100%) | 1 | 0 (8%) | 0 | 0 | 0 | 0 | 0 | 1 |

**ಆಡಳಿತಾಧಿಕಾರಿ**

| ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಮಂಜೂರಾದ | | | ರಾಜ್ಯ ಮಟ್ಟದ ಕಛೇರಿಯಲ್ಲಿನ ವೃಂದ ಬಲ | ರಾಜ್ಯ ಮಟ್ಟದ ಸ್ಥಳೀಯ ವೃಂದ | ಹೈದ್ರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಕಛೇರಿಗಳಲ್ಲಿನ ವೃಂದ ಬಲ | ಪ್ರಾದೇಶಿಕ ಸ್ಥಳೀಯ ವೃಂದ | ರಾಜ್ಯ ವ್ಯಾಪ್ತಿ ಸ್ಥಳೀಯ ವೃಂದ | ನೇರ ನೇಮಕಾತಿ | ಮುಂಬಡ್ತಿ | ಉಳಿದ ಮೂಲ ವೃಂದ |
|---|---|---|---|---|---|---|---|---|---|---|
| ಮೂಲ ವೃಂದ | ನೇರ ನೇಮಕಾತಿ | ಮುಂಬಡ್ತಿ | | | | | | | | |
| 7 | 0 | 7 (100%) | 7 | 1 (8%) | 0 | 0 | 1 | 0 | 1 (100%) | 6 |

**ಸಹಾಯಕ ಆಡಳಿತಾಧಿಕಾರಿ**

| ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಮಂಜೂರಾದ | | | ರಾಜ್ಯ ಮಟ್ಟದ ಕಛೇರಿಯಲ್ಲಿನ ವೃಂದ ಬಲ | ರಾಜ್ಯ ಮಟ್ಟದ ಸ್ಥಳೀಯ ವೃಂದ | ಹೈದ್ರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಕಛೇರಿಗಳಲ್ಲಿನ ವೃಂದ ಬಲ | ಪ್ರಾದೇಶಿಕ ಸ್ಥಳೀಯ ವೃಂದ | ರಾಜ್ಯ ವ್ಯಾಪ್ತಿ ಸ್ಥಳೀಯ ವೃಂದ | ನೇರ ನೇಮಕಾತಿ | ಮುಂಬಡ್ತಿ | ಉಳಿದ ಮೂಲ ವೃಂದ |
|---|---|---|---|---|---|---|---|---|---|---|
| ಮೂಲ ವೃಂದ | ನೇರ ನೇಮಕಾತಿ | ಮುಂಬಡ್ತಿ | | | | | | | | |
| 80 | 0 | 80 (100%) | 22 | 2 (8%) | 8 | 6 (75%) | 8 | 0 | 8 (100%) | 72 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಎ).

**P.R. 438**

**SC-300**

## ಕಂದಾಯ ಸಚಿವಾಲಯ

### ಸೇರ್ಪಡೆ

**ಸಂಖ್ಯೆ : ಕಂಇ 149 ಭೂದಾಸ 2013, ಬೆಂಗಳೂರು, ದಿನಾಂಕ : 28-05-2015.**

ಭಾರತ ಸಂವಿಧಾನದ ಅನುಚ್ಛೇದ 371(ಜೆ)ಯನ್ನು ಅನುಷ್ಠಾನಗೊಳಿಸುವ ಸಂಬಂಧ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ಮೀಸಲಾತಿ) 2013ರ ಆದೇಶವು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ ಅನ್ವಯಿಸುವಂತೆ ಇದೇ ಕ್ರಮಸಂಖ್ಯೆಯ ದಿನಾಂಕ : 25-09-2014 ರ ಅಧಿಸೂಚನೆಯ ಅನುಬಂಧಕ್ಕೆ, ಈ ಅಧಿಸೂಚನೆಗೆ ಲಗತ್ತಿಸಿರುವ ದಫ್ತರ್‌ಬಂದ್ ಮತ್ತು ದಫೇದಾರ್ ಪಟ್ಟಿಯ ಅನುಸೂಚಿಯನ್ನು ಸದರಿ ಮೀಸಲಾತಿಗೆ ಒಳಪಡಿಸಲಾಗಿದೆಯೆಂದು/ಸೇರಿದೆಯೆಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ವಿವಿಧ ವೃಂದಗಳಲ್ಲಿ ನಿಗದಿಪಡಿಸಲಾದ ಮೀಸಲಾತಿಯು ಕ್ರಮಬದ್ಧವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ನಿರಂಜನಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಂದಾಯ ಇಲಾಖೆ (ಭೂಮಾಪನ).

### ಅನುಸೂಚಿ

### ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ

| ಕ್ರ ಸಂ. | ವೃಂದ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಮಂಜೂರಾದ | | | ರಾಜ್ಯ ಮಟ್ಟದ ಕಛೇರಿಯಲ್ಲಿನ ವೃಂದ ಬಲ | ರಾಜ್ಯ ಮಟ್ಟದ ಸ್ಥಳೀಯ ವೃಂದ | ಹೈದ್ರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಕಛೇರಿಗಳಲ್ಲಿನ ವೃಂದ ಬಲ | ಪ್ರಾದೇಶಿಕ ಸ್ಥಳೀಯ ವೃಂದ | ರಾಜ್ಯ ವ್ಯಾಪ್ತಿಯ ಸ್ಥಳೀಯ ವೃಂದ | ರಾಜ್ಯ ವ್ಯಾಪ್ತಿಯ ಸ್ಥಳೀಯ ವೃಂದದಲ್ಲಿ ನೇರ ನೇಮಕಾತಿ ಹಾಗೂ ಮುಂಬಡ್ತಿಗೆ ಗುರುತಿಸಲಾದ ಹುದ್ದೆಗಳು | | | | ಉಳಿದ ಮೂಲ ವೃಂದ |
|---|---|---|---|---|---|---|---|---|---|---|---|---|---|---|---|---|
| | | | | ಮೂಲ ವೃಂದ | ನೇರ ನೇಮಕಾತಿ | ಮುಂಬಡ್ತಿ | | | | | | | | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | | | | 14 |
| ದಫ್ತರ್‌ಬಂದ್ | | | | | | | | | | | | | | | | |
| | | | | | | 100% | | 8% | | 85% | (9+11) | | 100% | ಒಟ್ಟು | | |
| 1 | ಗ್ರೂಪ್ ಡಿ | ದಫ್ತರ್‌ಬಂದ್ | 11000-19000 | 72 | 0 | 72 | 18 | 1.44 rounded off to 2 | 13 | 11.05 rounded off to 12 | 14 | 0 | 14 | 14 | | 58 |
| ದಫೇದಾರ್ | | | | | | | | | | | | | | | | |
| | | | | | | 100% | | 8% | | 85% | (9+11) | | 100% | ಒಟ್ಟು | | |
| 1 | ಗ್ರೂಪ್ ಡಿ | ದಫೇದಾರ್ | 11000-19000 | 6 | 0 | 6 | 3 | 0.24 rounded off to 1 | 1 | 0 | 1 | 0 | 1 | 1 | | 5 |

P.R. 428
SC-100

**ಕೆ. ನಿರಂಜನ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಕಂದಾಯ ಇಲಾಖೆ (ಭೂಮಾಪನ).

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 307 ಬೆಂರೂಪ್ರಾ 2014 ಬೆಂಗಳೂರು, ದಿನಾಂಕ: 29-07-2015.**

ಕರ್ನಾಟಕ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ 2012ರನ್ವಯ ರಾಜ್ಯ ನಗರಾಭಿವೃದ್ಧಿ ಪ್ರಾಧಿಕಾರಗಳಲ್ಲಿ ದಿನಾಂಕ: 10-04-2006ರಂದು 10 ವರ್ಷಗಳ ನಿರಂತರ ಸೇವೆ ಸಲ್ಲಿಸಿರುವ ಹಾಗೂ ಈ ಅಧಿನಿಯಮವು ಜಾರಿಗೆ ಬಂದ ದಿನಾಂಕದಂದು ಕಾರ್ಯನಿರತನಾಗಿರುವ ಅರ್ಹ ದಿನಗೂಲಿ ನೌಕರರ ವಿವರಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಿ ಅಧಿಸೂಚಿಸಲಾಗಿದೆ. ಅದರಂತೆ, ಈ ಕೆಳಕಂಡ ಅರ್ಹ ದಿನಗೂಲಿ ನೌಕರರು ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 77 ಶಾಸನ 2012, ದಿನಾಂಕ: 15-02-2013ರ ಅಧಿನಿಯಮದ ಪ್ರಕಾರ ಬದ್ಧರಾಗಿರತಕ್ಕದ್ದು.

**ಚಿತ್ರದುರ್ಗ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ದಿನಗೂಲಿ ನೌಕರರ ವಿವರಗಳು**

| ಕ್ರಮ ಸಂ. | ಅಭ್ಯರ್ಥಿಯ ಹೆಸರು | ಹುಟ್ಟಿದ ದಿನಾಂಕ | ವರ್ಗ (ಸಾಮಾನ್ಯ /ಹಿಂದುಳಿದ ವರ್ಗ/ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ) | ದಿನಗೂಲಿ ಸೇವೆಗೆ ಸೇರಿದ ದಿನಾಂಕ | ದಿನಗೂಲಿ ಸೇವೆಗೆ ಸೇರಿದ ವೇಳೆ ಅಭ್ಯರ್ಥಿಯ ವಿದ್ಯಾರ್ಹತೆ ಮತ್ತು ಪಡೆದ ದಿನಾಂಕ | ಪ್ರಸ್ತುತ ವಿದ್ಯಾರ್ಹತೆ ಹಾಗೂ ಪಡೆದ ದಿನಾಂಕ | ದಿನಗೂಲಿ ಸೇವೆಗೆ ನೇಮಕಗೊಂಡ ಹುದ್ದೆ ಹಾಗೂ ವೃಂದ (ಸದರಿ ಹುದ್ದೆಗೆ ವೃಂದ & ನೇಮಕಾತಿ ನಿಯಮದನ್ವಯ ನಿಗದಿಪಡಿಸಿದ ವಿದ್ಯಾರ್ಹತೆ) | ಪ್ರಸ್ತುತ ನಿರ್ವಹಿಸುತ್ತಿರುವ ಹುದ್ದೆ ಹಾಗೂ ವೃಂದ | ದಿನಗೂಲಿ ಸೇವೆಗೆ ತೆಗೆದುಕೊಳ್ಳಲು ಹೊರಡಿಸಿದ ಆದೇಶ ಹಾಗೂ ವೇತನ | ಒಟ್ಟು ದಿನಗೂಲಿ ಸೇವೆ (ಸೇವಾ ವಿಭಿನ್ನತೆ ವಿವರದೊಂದಿಗೆ) | ಪ್ರಸ್ತುತ ದಿನಗೂಲಿ ಸೇವೆಯಲ್ಲಿರುವ ಬಗ್ಗೆ ಷರಾ (ವೇತನ, ಇತರೆ..) |
|---|---|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** | **11** | **12** |
| 1 | ಆರ್.ಮಂಜುನಾಥ | 22.05.1967 | ಸಾಮಾನ್ಯ | 01.06.1995 | 1990ನೇ ಸಾಲಿನಲ್ಲಿ ಬಿ.ಎ. ಉತ್ತೀರ್ಣ | 1990ನೇ ಸಾಲಿನಲ್ಲಿ ಬಿ.ಎ. ಉತ್ತೀರ್ಣ | ಗುಮಾಸ್ತ ಮತ್ತು ಬೆರಳಚ್ಚುಗಾರ | ಗುಮಾಸ್ತ ಮತ್ತು ಬೆರಳಚ್ಚುಗಾರ "ಸಿ" ಗುಂಪು | ದಿ:01.06.1995 ರಿಂದ ಲೋಕೋಪಯೋಗಿ ಇಲಾಖೆ ದರಪಟ್ಟಿಯಂತೆ ದಿನಗೂಲಿ ನೀಡಲಾಗುತ್ತಿದೆ. | 20 ವರ್ಷ | ಹಾಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಲೋಕೋಪಯೋಗಿ ಇಲಾಖೆ ದರಪಟ್ಟಿಯಂತೆ ವೇತನ ನೀಡಲಾಗುತ್ತಿದೆ. |
| 2 | ಹೆಚ್. ಅಯೂಬ್ ಖಾನ್ | 17.06.1965 | 2ಬಿ | 01.06.1995 | 1983ನೇ ಸಾಲಿನಲ್ಲಿ ಎಸ್ಎಸ್ಎಲ್ಸಿ ಉತ್ತೀರ್ಣ | 1983ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ ಉತ್ತೀರ್ಣ | ವಾಹನ ಚಾಲಕ | ವಾಹನ ಚಾಲಕ "ಸಿ" ಗುಂಪು | ದಿ:01.06.1995 ರಿಂದ ಲೋಕೋಪಯೋಗಿ ಇಲಾಖೆ ದರಪಟ್ಟಿಯಂತೆ ದಿನಗೂಲಿ ನೀಡಲಾಗುತ್ತಿದೆ. | 20 ವರ್ಷ | ಹಾಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಲೋಕೋಪಯೋಗಿ ಇಲಾಖೆ ದರಪಟ್ಟಿಯಂತೆ ವೇತನ ನೀಡಲಾಗುತ್ತಿದೆ. |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 3 | ಎನ್.ನಾಗೇಂದ್ರಪ್ಪ | 25.06.1965 | ಪರಿಶಿಷ್ಟ ಜಾತಿ | 01.06.1995 | 1993ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ ಉತ್ತೀರ್ಣ | 1993ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ ಉತ್ತೀರ್ಣ | "ಡಿ" ಗುಂಪು | "ಡಿ" ಗುಂಪು | ದಿ : 01.06.1995 ರಿಂದ ಲೋಕೋಪಯೋಗಿ ಇಲಾಖೆ ದರಪಟ್ಟಿಯಂತೆ ದಿನಗೂಲಿ ನೀಡಲಾಗುತ್ತಿದೆ. | 20 ವರ್ಷ | ಹಾಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಲೋಕೋಪಯೋಗಿ ಇಲಾಖೆ ದರಪಟ್ಟಿಯಂತೆ ವೇತನ ನೀಡಲಾಗುತ್ತಿದೆ. |

ಈ ಅಧಿಸೂಚನೆಯಲ್ಲಿರುವ ದಿನಗೂಲಿ ನೌಕರರು ದಿನಗೂಲಿ ನೌಕರರಾಗಿ ಸೇವೆಗೆ ಸೇರುವಾಗ ದಿನಗೂಲಿ ನೌಕರರ ಕ್ಷೇಮಾಭಿವೃದ್ಧಿ ಅಧಿನಿಯಮ, 2012ರಂತೆ ಅರ್ಹತೆ ಹೊಂದದೆ ಇದ್ದಲ್ಲಿ ಹಾಗೂ ಸಲ್ಲಿಸಿರುವ ಮಾಹಿತಿ ಹಾಗೂ ದಾಖಲೆ ಸುಳ್ಳು / ಫೋರ್ಜರಿಯಾಗಿದ್ದಲ್ಲಿ ಅವರುಗಳ ಹೆಸರು ಈ ಅಧಿಸೂಚನೆಯಲ್ಲಿ ಸ್ವಯಂಚಾಲಿತವಾಗಿ ರದ್ದಾಗುವ ಷರತ್ತಿಗೊಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ.ರಾಜೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 504**
**SC -25**

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಪಸಂಮೀ 213 ಮೀಇಯೋ 2014, ಬೆಂಗಳೂರು, ದಿನಾಂಕ : 03-06-2015.**

ಸಂಖ್ಯೆ : ಪಸಂಮೀ/142/ಮೀಇಯೋ/2014, ದಿನಾಂಕ : 10-09-2014ರ ಆದೇಶ ಭಾಗದ ಷರತ್ತು ಮತ್ತು ನಿಬಂಧನೆಗಳಲ್ಲಿ ಕ್ರಮ ಸಂಖ್ಯೆ 7 ರಲ್ಲಿ "**ಸಾಧ್ಯತಾ ಪತ್ರ ಪಡೆದು ನಿರ್ಮಾಣ ಮಾಡಿದ ದೋಣಿಯನ್ನು 2 ವರ್ಷಗಳ ಅವಧಿಯೊಳಗೆ ಪರಭಾರೆ ಮಾಡತಕ್ಕದ್ದಲ್ಲ**" ಎಂಬುದರ ಬದಲಾಗಿ "**ಮೀನುಗಾರಿಕೆ ದೋಣಿ ನೋಂದಣಿ ಮಾಡಿದ ದಿನಾಂಕದಿಂದ 5 ವರ್ಷಗಳ ಅವಧಿಗೆ ಪರಭಾರೆ/ಮಾರಾಟ ಮಾಡಬಾರದು**" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರಶ್ಮಿ ಶಿವಶಂಕರ ಪೋಳ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ).

**P.R. 420**
**SC-50**

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59